ಒಂದಾಣೆ ಮಾಲೆ 335

# ಅಲೆಕ್ಸಾಂಡರ್

(ಐತಿಹಾಸಿಕ ಏಕಾಂಕ ನಾಟಕ)



ರಚಯಿತ:

ಗೋಪಾಲಕೃಷ್ಣ ಆಚಾರ್ಯ, ಚಿತ್ರಾಪುರ.



1962

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

(ಹೊದಿಕೆಯ ಎರಡನೇ ಪುಟದಿಂದ ಮುಂದುವರಿದುದು)

ದೃಶ್ಯ ೭

(ಪಟ್ಟಣ, ಬಾದಶಹನು ಅಸ್ವಸ್ಥದಿಂದ ಮಲಗಿರುವನು. ಸೆಲ್ಯೂಕಸ್, ಎಂಟಿಗೋನಸ್ ಉಪಚಾರ ನಡೆಸುತ್ತಿದ್ದಾರೆ).

ಅಲೆ: (ನಡುಗುವ ಧ್ವನಿ) ಹಾ! ಪ್ರಿಯೆತಮೆ, ನಿನ್ನನ್ನು ಎಂದು ಕಾಣಲಿ? ನಿನ್ನ ಸುಖವನೆಂತು ಪಡೆಯಲಿ? ರೋಕ್ಸಾ, ರೋಕ್ಸಾ, ಬಂದೆಯಾ? ಸೆಲ್ಯೂಕಸ್, ಗುರೂಜಿ ಬಂದರೆ?

ಸೆಲ್ಯೂಕಸ್: ಬಾದಶಹರೇ, ಮನಸ್ಸಿಗೆ ಹೆಚ್ಚು ನೋವುಂಟಾಗಿದೆ. ನಿಶ್ಚಿಂತೆಯಿಂದ ಮಲಗಿರಿ. ಸದ್ಯದಲ್ಲಿ ಗುರುಗಳು ಬರುವರು.

ಅಲೆ: ಅಯ್ಯೋ, ಸಹಿಸಲಾರೆ ಪ್ರಿಯತಮೆ ರೋಕ್ಸಾ, ನಿನ್ನ ಮುಖವನ್ನೊನ್ಮೆ ಕಾಣಬಾರದೆ? ಬರಲಾರೆಯಾ? (ರೋಕ್ಸಾ ಪ್ರವೇಶಿಸಿ ದುಃಖದಿಂದ) ಹಾ, ಪ್ರಿಯತಮಾ! ಇದೇನು ಪ್ರಮಾದ? ಏನಾಯ್ತು? ಪುರುರಾಜನಿಂದ ಈ ದುರವಸ್ಥೆ ಬಂದಿರಬಹುದೆ?

ಅಲೆ: ಅಲ್ಲ. ರೋಕ್ಸಾ! ಧರ್ಮಿಷ್ಠ ರಾಜನಿಂದ ಯಾವ ಬಾಧೆಯೂ ಉಂಟಾಗಲಿಲ್ಲ ಹಠಾತ್ತಾಗಿ ಉದರವೇದನೆಯು ದೆಸೆಯಿಂದ ಸಹಿಸಲಾರೆ. ಅಯ್ಯೊ! ಅಬ್ಬಾ! ರೋಕ್ಸಾ! ಹೋಗು, ಸೈನ್ಯದವರಿಗೆಲ್ಲಾ ಹೇಳು. ನನಗಂತೂ ಬದುಕುವ ಆಸೆ ಇಲ್ಲ. ನನ್ನನ್ನೇ ನಂಬಿದ ನೀನೂ, ಸೈನ್ಯದವರೆಲ್ಲಾ ಕೆಟ್ಟಿರಿ. ಗುರೂಜಿ ಬಂದರೇ?

ರೋಕ್ಸಾ: ಈಗತಾನೆ ಬರುವರು. ಪ್ರಿಯತಮಾ, ಯಾವ ತಾಪವೂ ಇಲ್ಲದೆ ಹಾಯಾಗಿ ವಿಶ್ರಮಿಸಿಕೊಳ್ಳಿ. ನಾವೀಗ ಮಧ್ಯಮಾರ್ಗದ "ಬೆಬಿಲೋನ್" ಪಟ್ಟಣದಲ್ಲಿದ್ದೇವೆ

ಅಲೆ: ರೋಕ್ಸಾ, ರೋ-ಕ್ಸಾ, ಗುರೂಜಿ, ಗು-ರೂ-ಜಿ, ನಿಮಗೆ ಶುಭವಾಗಲಿ. ಬೆಬಿ-ಲೊನ್, ಬೆ-ಬಿ-ಲೊ-ನ್. (ಮೃತನಾಗಲು, ರೋಕ್ಸಾ ಬೀಳುವಳು. ಗುರುವು ಪ್ರವೇಶಿಸಿ) ಅಲೆಕ್ಸಾಂಡರ, ವೀರಕೇಸರಿಯಾದ! ನೀನು ಪುಣ್ಯಜೀವಿ! ಮಾಡಬೇಕಾದ ಕರ್ತವ್ಯವನ್ನು ಸಾಧಿಸಿದೆ. ನಿನ್ನ ಈ ಕಥೆಯು ಆದರ್ಶವೂ, ಜನಾದರಣೀಯವೂ ಆಗಿದೆ. ಉತ್ತಮ ಲೋಕದಲ್ಲಿ ಸ್ವಚ್ಛಂದವಾಗಿ ವಿಹರಿಸು. (ತೆರೆ ಬೀಳುವುದು).

— ಸಂಪೂರ್ಣ —

*********

# ಅಲೆಕ್ಸಾಂಡರ್

## (ಏಕಾಂಕ ನಾಟಕ)

..........

### ದೃಶ್ಯ ೧

(ವೇಶ್ಯಾಗೃಹ ಅಲೆಕ್ಸಾಂಡರನೂ ಗುರುವೂ ಪ್ರವೇಶಿಸುತ್ತಾರೆ)

ಗುರು: ಅಲೆಕ್ಸಾಂಡರ!

ಅಲೆ: ಗುರೂಜೀ....(ಕೈಜೋಡಿಸುವನು).

ಗುರು: ನನ್ನ ಮಾತುಗಳು ನಿನಗೆ ಕರ್ಣಕಠೋರವಾಗಿ ಕೇಳಿಸಬಹುದಲ್ಲ.

ಅಲೆ: ನಿಜ ಗುರೂಜಿ. ನನ್ನ ಹೃದಯವನ್ನು ಕೊರಲಗಿನಿಂದ ಚುಚ್ಚುತ್ತಿವೆಯಾದರೂ ನಿಮ್ಮ ಜ್ಞಾನಮುಖದಿಂದ ಹೊರಬೀಳುವ ನುಡಿಗಳು ನನ್ನ ಹಿತಕ್ಕಾಗಿ ಎಂಬುದನ್ನು ಮರೆಯಲಾರೆ. ಆದರೆ....

ಗುರು: ಆದರೆ ಎಂಬ ಅರ್ಧೋಕ್ತಿಯು ಸಂಪೂರ್ಣತೆಗೆ ನಿನ್ನ ಮನಸ್ಸೇ ಕಳವಳಗೊಂಡಿದೆ. ನಿನ್ನ ಸುಖವೇ ನನ್ನ ಹಿತ. ನೀನು ವೀರನಾಗಿದ್ದರೂ ನಿನ್ನ ಬುದ್ಧಿಯು ಮಾಯೆಯಿಂದ ಮುಸುಕಿದೆ. ಈ ಮರುಳಾಟಕ್ಕೆ ಎಲ್ಲಿದೆ ಕೊನೆ?

ಅಲೆ: ಗುರೂಜಿ! ನಿಮ್ಮ ಕರುಣದಿಂದ ನನ್ನ ದಿನಗಳು ಹೀಗೆ ಕಳೆದರೆ ಸಾಕು. ಮನಸ್ಸು ನಿಶ್ಚಿಂತೆಯಿಂದ ಇದ್ದರೆ ಸಾಕು. ಹೆಚ್ಚಿನ ಆಸೆಗೆ ಕೊನೆಯಾದೀತೆ?

ಗುರು: ಮಗೂ, ಆಹಾರ, ನಿದ್ರಾ, ಭಯ, ಸಂಸರ್ಗ ಇವು ಸಾಮಾನ್ಯ ಪಶುವರ್ಗಕ್ಕೂ ಇವೆ. ತಿಳಿದ ನೀನು ನಿರ್ವೀರ್ಯನೂ ನಿಸ್ತೇಜನೂ ಆಗುವುದರಲ್ಲಿ ಅರ್ಥವೇನು? ಸಾಧಕ ಕರ್ಮಗಳಲ್ಲಿ ಉದಾಸೀನನಾಗದಿರು.

ಅಲೆ: ಗುರೂಜಿ; ಸತ್ಯ. ಆದರೆ ನನ್ನ ಪ್ರೇಯಸಿಯು ಹಾಗಲ್ಲ. ಅವಳ ರೂಪ, ಲಾವಣ್ಯ, ಗುಣ ಇವುಗಳನ್ನು ನೀವಿನ್ನೂ ತಿಳಿದಿಲ್ಲ.

ಗುರು: ಅಲೆಕ್ಸಾಂಡರ! ನಿನ್ನ ಮನಸ್ಸು ಬಹುವಾಗಿ ಮೋಹಿಸಿದೆ. ಹೇಯವಾದ ಕಾರ್ಯದಲ್ಲಿ ಜೀವನವನ್ನು ಮುಗಿಸಿ ಕೀರ್ತಿಲತೆಗೆ ಬಿಸಿನೀರು ಎರಚುವೆ. ನನ್ನ ಮಾತಿಗೆ ಸ್ಟೈಗೊಡದೆ ಹೋದೆಯಾದರೆ ಜನ್ಮಜನ್ಮಗಳಲ್ಲೂ ಷಂಡನಾಗುವೆ ಎಚ್ಚರಿಕೆ, ನಿರ್ವೀರ್ಯನಾಗದಿರು. ನಿಸ್ತೇಜನಾಗದಿರು. ಷಂಡನಾಗದಿರು. ಇನ್ನೆಂತು ಹೇಳಲಿ? ಇದೇ ಜೀವನವೇ ಲೇಸೆಂದು ಬಗೆದರೆ ಸಿನಗಿದೋ ಧಿಕ್ಕಾರ! ಧಿಕ್ಕಾರ! (ಹೋಗುವನು).

ಅಲೆ: (ಪಶ್ಚಾತ್ತಾಪದಿಂದ) ಗುರೂಜಿ, ಗುರೂಜಿ! ಹೊರಟೇ ಹೋದರೆ? ಅಯ್ಯೊ (ಹಣೆ ಬಡಿಯುವನು. ರೋಕ್ಸಾ ಪ್ರವೇಶಿಸಿ) ಪ್ರಿಯತಮ, ಇದೇನು ಪ್ರಮಾದ? ಇದೇಕೆ ದುಃಖ; ಹೇಳಬಾರದೆ?

ಅಲೆ: ನನ್ನ ನಲ್ಲೆ! ಕ್ರೂರನಾದರೂ ನಿನ್ನ ನೋಟದಿಂದ ಶಣುವಾಗಲೇಬೇಕು.

ರೋಕ್ಸಾ: ಈ ಮುಂಚೆ ಬಂದ ಗುರುಗಳು ಹೋದರೆ? ಏನೆಂದರವರು? ಅವರ ಮಾತಿನಿಂದ ನೀವಿಷ್ಟು ಆರ್ತನಾಗಿರಬಹುದೆ?

ಅಲೆ: ಹೌದು ರೋಕ್ಸಾ! ಮರೆಯಲ್ಲಿದ್ದು ಮಾತು ಕೇಳಿದೆಯೋನು?

ರೋ: ಹೌದು ಪ್ರಿಯಾ. ಕೇಳಬಾರದ್ದನ್ನು ಕೇಳಿದೆ. ಅವರ ಪೊಳ್ಳು ಮಾತಿಗೆ ಮರುಳಾಗಲಾರಿರಷ್ಟೆ?

ಅಲೆ: ಹಾಗೆಂದರೆ ಗುರುಗಳನ್ನು ಹೀನದೃಷ್ಟಿಯಿಂದ ನೋಡಿದೆಯಾ? ಅವರ ನುಡಿಗಳು ಅಕ್ಷರಶಃ ಸತ್ಯ.

ರೋ: ಹಾಗಾದರೆ ಹಿಂದೂಸ್ಥಾನಕ್ಕೆ ಧಾಳಿ ಇರಿಸುವಿರೆ? ಧರ್ಮಾತ್ಮ ಪುರುವಿನೊಡನೆ ಸಮರಗೈಯ್ಯಲು ಸಾಧ್ಯವೆ?

ಅಲೆ: ಹೌದು ರೋಕ್ಸಾ! (ಅವಳ ಗಲ್ಲ ಹಿಡಿದು) ಗಾಬರಿಯಾಗದಿರು. ನನ್ನ ಹಿತಕ್ಕಾಗಿ ಎಚ್ಚರಿಸಿದರು. ನಾನು ವೀರನು, ತೇಜೋವಂತನೆಂದು ಅವರು ನುಡಿಯಬೇಕು. ನಿನ್ನ ಪ್ರೇಮವನ್ನು ಬಯಸಿದ ನನಗೆ ಶುಭವನ್ನೆ ಕೋರು. ನನ್ನ ಸೈನ್ಯದವರು ಸಿದ್ಧವಾಗಿರುವರು. ಬರುತ್ತೇನೆ. (ಹೋಗುವನು.)

ರೋ: ಹಾ! ಹೊರಟೇ ಹೋದರೆ? ಅಯ್ಯೋ, ಆ ವೀರಾಗ್ರೇಸರ ಪುರುರಾಜನೊಡನೆ ಸೆಣಸಾಟ ನಿಜಕ್ಕೂ ಸಾಗದು. ಇಂತಿರಲು, ನಾನು ಪ್ರಿಯನಿಗೋಸುಗ ಆ ರಾಜನನ್ನು ಕಾಣುವೆನು. (ಹೋಗುವಳು. ತೆರೆ).

## ದೃಶ್ಯ ೨

(ಸಭೆ. ಮಂತ್ರಿ, ಸೇನಾನಾಯಕ, ಸಮರ ನಿಂತಿರಲು, ಪುರುರಾಜನು ಜಯ ಘೋಷದೊಂದಿಗೆ ಪ್ರವೇಶಿಸಿ ಸಿಂಹಾಸನವೇರಲು, ಎಲ್ಲರೂ ಕುಳಿತುಕೊಳ್ಳುವರು. ನೃತ್ಯ ಮುಗಿದ ಬಳಿಕ)

ಪುರು: ಸಪರಿವಾರ ಮಂತ್ರಿ ಸೇನಾನಾಯಕರಿಗೆ ಶುಭಮಸ್ತು.

ಮಂತ್ರಿ: ಮಹಾರಾಜರಿಗೆ ಜಯವಾಗಲಿ. ಮಹಾರಾಜರ ಚಿತ್ತದಂತೆ ಪ್ರಜಾವರ್ಗವು ಶಾಂತಿ ಸಂತೋಷಗಳಿಂದ ನಲಿಯುತ್ತಿದೆ. ಆದರೂ............

ಪುರು: ಮಂತ್ರಿವರ್ಯ! ನೀವಂತಹ ಭಯಪಡುವವರಲ್ಲ. ನುಡಿಯಲ್ಲೇಕೆ ಅಸಂತೋಷ?

ಮಂತ್ರಿ: ಮಹಾರಾಜ! ಸಿಂಹಾಸನ ಅಧಿಕಾರವೆಂದರೆ ಕಠಾರಿಯ ಬಾಯಲ್ಲಿದ್ದಂತೆ. ಇತ್ತೀಚೆಗೆ ಒಂದು ವಾರ್ತೆ ಕೇಳಿದೆ. ಯುನಾನಾಧೀಶನಂತೆ, ಅಲೆಕ್ಸಾಂಡರನಂತೆ; ನಮ್ಮ ರಾಜ್ಯದ ಮೇಲೆ ದಂಡೆತ್ತಿ ಬರುವನೆಂಬ ವಾರ್ತೆ ತಿಳಿದಿದೆ. (ಆಗ ದೂತನು ಪ್ರವೇಶಿಸಿ "ಮಹಾರಾಜರಿಗೆ ಜಯವಾಗಲಿ! ದೂತನೊಬ್ಬನು ಭೇಟಿಗಾಗಿ ಕಾದಿಹನು" ಎಂದು ಹೋಗಲು, ಮರೆಮಾಚಿದ ವೇಷದಿಂದ ಅಲೆಕ್ಸಾಂಡರನು ಪ್ರವೇಶಿಸಿ) ರಾಜರಿಗೆ ಜಯವಾಗಲಿ! (ಎಂದು ಪತ್ರ ಮಂತ್ರಿ ಕೈಗೆ ಕೊಡುವನು).

ಮಂತ್ರಿ: (ಪತ್ರವನ್ನು ಗಟ್ಟಿಯಾಗಿ ಓದುವನು.) "ಎಲೈ ರಾಜನೇ, ಯುನಾನಾಧೀಶನು ಹೇಳುವುದೆಂದರೆ— ನೀನು ಆಳಿಕೊಂಡು ಬಂದಿರುವ ಈ ಸಮಸ್ತ ಸಂಪತ್ತನ್ನು ನನಗೊಪ್ಪಿಸಿ ಶರಣುಹೋಗಬೇಕು. ಇಲ್ಲವಾದರೆ ಬಲಾತ್ಕಾರದಿಂದ ಪಡೆದುಕೊಂಡೇನು. ಇದಕ್ಕೂ ತಪ್ಪಿದರೆ.........

ಪುರು: ಮಂತ್ರಿ! ಸಾಕುಮಾಡು. ಎಲವೋ ರಾಜದೂತ! ಈ ಪುರುರಾಜನನ್ನು ಏನೆಂದು ತಿಳಿದುಕೊಂಡಿರುವರು ನಿಮ್ಮ ಬಾದಶಹರು? ಹೆಣ್ಣೊಬ್ಬಳ ಮೋಹಕ್ಕೆ ಮರುಳಾದ ನಿಮ್ಮ ಬಾದಶಹರಿಗೆ ಮಣಿಯುವ ಕಿರೀಟವಲ್ಲೆಂದು ತಿಳಿಸು.

ಅಲೆ. ಏಕಿಷ್ಟು ಕೋಪಾವೇಶ? ನಮ್ಮ ಬಾದಶಹರಿಂದ ನಿಮಗುಂಟಾದ ನಷ್ಟವೇನು?

ಪುರು: ನಷ ವೆ? ಭಾರತಾಂಬೆಯ ಮಡಿಲಲ್ಲಿ ಹುಟ್ಟಿ ಬೆಳೆದ ಭಾರತೀಯರನ್ನು ಅನ್ಯಾಯವಾಗಿ, ನಿಷ್ಕಾರಣವಾಗಿ ಹಿಂಸಿಸುತ್ತಿರುವ ನಿಮ್ಮ ಬಾದಶಹರು ನೀತಿವಂತರೇನು?

ಅಲೆ: ಬಲಾತ್ಕಾರದಿಂದ ನಿಮ್ಮನ್ನೆದುರಿಸುವ ಎದೆಗಾರಿಕೆ ನಮ್ಮ ಬಾದಶಹರಲ್ಲಿದೆ.

ಪುರು: ಇರಬಹುದು. ಅಂತೆಯೇ ಬಾದಶಹರ ಕತ್ತನ್ನು ಕತ್ತರಿಸುವ ಕಠಾರಿಯೂ ನಮ್ಮಲ್ಲಿದೆ.

ಅಲೆ: ರಾಜರೆ! ಇಂತಹ ಮಾತುಗಳು ನಮ್ಮ ಬಾದಶಹರ ಮುಂದೆ ನುಡಿಯುತ್ತಿದ್ದರೆ ಆಗಲೇ....

ಪುರು: ಎಲವೋ ದೂತ! ನುಡಿಯುತ್ತಿಲ್ಲವೆ? ಮತ್ತಾರ ಮುಂದೆ ನುಡಿಯುತ್ತಿರುವೆನು? ದೂತನ ಮುಂದೆಯೇ? ದೂತನ ವೇಷದಲ್ಲಿದ್ದ ಅಲೆಕ್ಸಾಂಡರನ ಮುಂದೆಯೇ? ನಿಜ ಹೇಳು. ಯಾರಲ್ಲಿ ಕಪಟ?

ಅಲೆ: ಭಲೆ! ನಿನ್ನ ಬುದ್ಧಿವಂತಿಕೆಗೆ ಮೆಚ್ಚಿದೆನು. ಹೌದು, ನಾನೇ ಅಲೆಕ್ಸಾಂಡರ! ಎಲ್ಲಿ ನಿಮ್ಮ ಸೇನಾನಾಯಕರು? ಬಂಧಿಸಲಿ ಈ ಅಲೆಕ್ಸಾಂಡರನನ್ನು. (ಎದೆ ಬಡಿಯುವನು).

ಪುರು: ಅಲೆಕ್ಸಾಂಡರ! ನಾವಂಥವರಲ್ಲ. ನಮ್ಮ ಶಕ್ತಿಪರೀಕ್ಷೆಯು ಯುದ್ಧಭೂಮಿಯಲ್ಲಿ ನಡೆಯಲಿ. ಆಗಲೂ ಇಂತಹ ಕಪಟಗಳನ್ನು ತೋರಲಾರಿರಷ್ಟೆ?

ಮಂತ್ರಿ: ರಾಜ! ಕೈಗೆ ಸಿಕ್ಕಿದ ರಿಪುವನ್ನು ಬಿಡುವುದು ಸಮ್ಮತವೆ?

ಪುರು: ಮಂತ್ರಿಗಳೇ, ಈತನು ರಾಜನಾಗಿ ಬಂದಿಲ್ಲ. ದೂತನಾಗಿ ಬಂದಿರುವನು. ಕ್ಷತ್ರಿಯಧರ್ಮಕ್ಕೆ ವಿರೋಧವಾಗ ನಡೆಯಲಾಗದು. ಈತನು ಸುರಕ್ಷಿತವಾಗಿ ನಮ್ಮ ರಾಜ್ಯದ ಗಡಿಯನ್ನು ದಾಟಲಿ......

ಅಲೆ: ಭಲೆ, ಭೇಷ್! ಎಂದೂ ಯಾರಿಗೂ ಮಣಿಯದ ಈ ಶಿರವು ನಿನಗೆ ಮಣಿಯುವುದು! ಬರುತ್ತೇನೆ, ಪ್ರಣಾಮ! (ಹೋಗುವನು).

ಪುರು: ಸೇನಾನಾಯಕರೇ, ಏನೆನ್ನುವಿರಿ?

ಸೇನಾ: ಪ್ರಭುಗಳ ಚಿತ್ತ. ನಮ್ಮಲ್ಲಿ ಸಾಕಷ್ಟು ಜನಬಲ, ಧನಬಲವಿದೆ. ನಾವಂಜಬೇಕಾದ್ದಿಲ್ಲ.

ಸಮರ: ಅಪ್ಪಾ! ಸೇನಾಧಿಪತಿಗಳೆಂದಂತೆ ಅಂಜಬೇಕಾಗಿಲ್ಲ. ಅಲೆ

ಕ್ಸಾಂಡರನು ಭುಜಬಲದವನೆಂದು ಗುರುತಿಸಬಹುದು. ಆದರೂ ಗಣ್ಯ ವಲ್ಲ. (ಆಗ ದೂತನೊಬ್ಬನು ಬಂದು "ಪ್ರಭುಗಳ ಭೇಟಿಗಾಗಿ ಹೆಂಗಸೊಬ್ಬಳು ಕಾದಿರುವಳು" ಎಂದು ಹೋಗಲು, ರಾಜನನ್ನುಳಿದು ಇತರರು ಹೋಗುವರು. ರೋಕ್ಸಾ ಪ್ರವೇಶಿಸಿ) ಮಹಾರಾಜರಿಗೆ ಜಯವಾಗಲಿ! (ಕೈಜೋಡಿಸುವಳು).

ಪುರು: ಯಾರಮ್ಮ ನೀನು? ನನ್ನಿಂದಾಗಬೇಕಾದ ಸಹಾಯವೇನು?

ರೋಕ್ಸಾ: ನಾನು ಪರರಾಷ್ಟ್ರದವಳು. ಇಂದು ಶುಭದಿನ. ರಕ್ಷಾ ಯಂತ್ರವನ್ನು ಕಟ್ಟಿ ನಿಮ್ಮ ತಂಗಿಯಾಗಬಯಸುವೆನು.

ಪುರು: ಬಹು ಸಂತೋಷ! ತಂಗಿಯರಿಲ್ಲದ ನನಗೆ ನೀನೇ ತಂಗಿ. ಇಗೋ, ಕಟ್ಟು (ಬಲಗೈ ಮುಂದಿರಿಸುವನು. ಕಟ್ಟುವಳು),

ರೋಕ್ಸಾ: ಧನ್ಯೋಽಸ್ಮಿ!

ಪುರು: ತಂಗೀ! ನೀನಿನ್ನು ಆಚಂದ್ರಾರ್ಕ ಪರಿಯಂತ ನನ್ನ ತಂಗಿ. ಬೇಕಾದ್ದನ್ನು ಕೇಳು. ಕೊಡುತ್ತೇನೆ.

ರೋಕ್ಸಾ: ನಿಜಕ್ಕೂ ಕೊಡುವಿರಾದರೆ, ನಮ್ಮ ಬಾದಶಹರು ಸಮರ ಭೂಮಿಯಲ್ಲಿ ಎದುರಾದರೆ ಜೀವದಾನವನ್ನು ಕೊಡುವಿರಾ?

ಪುರು: ............

ರೋಕ್ಸಾ: ಏಕೆ ಮಾತಾಡುವುದಿಲ್ಲ. ಅಂಜಿದಿರೆ?

ಪುರು: ಅಂಜಿಕೆಯಲ್ಲ ತಂಗೀ, ಕಾರ್ಯದ ಚಿಂತೆ.

ರೋಕ್ಸಾ: ಬೇಸರಿಸದಿರಿ. ಸಾಧ್ಯವಿಲ್ಲೆಂದರೆ ಕಟ್ಟಿದ ರಕ್ಷೆಯನ್ನು ಬಿಚ್ಚುವೆನು.

ಪುರು: ಛೆ! ತಂಗಿ, ಪುರುರಾಜನು ಕೊಟ್ಟ ಭಾಷೆಗೆ ತಪ್ಪತಕ್ಕವನಲ್ಲ. ಅಂಜಲಾರೆ; ಉಪಕಾರ ಜೀವನವೇ ನನ್ನದು. ನಿನ್ನ ಮಾತನ್ನು ನಿಜವಾಗಿಯೂ ನಡೆಸುವೆನು.

ರೋಕ್ಸಾ: ಮಹಾರಾಜ, ಧನ್ಯಳಾದೆ. ಬರುತ್ತೇನೆ (ಹೋಗುವಳು. ತೆರೆ).

## ದೃಶ್ಯ ೩

(ಬಯಲು. ಆಂಭಿರಾಜ, ಮಂಜು, ಸೆಲ್ಯೂಕಸ್, ಎಂಟಿಗೋನಸ್ ನಿಂತಿದ್ದಾರೆ).

ಆಂಭಿ: ಸೆಲ್ಯೂಕಸ್! ಹೇಗೆ ಯುದ್ಧೋತ್ಸಾಹಿಗಳಾಗಿ ಬರುತ್ತಿರು

ವರು ನಮ್ಮ ಸೈನ್ಯದವರು, ನೋಡು! ಸೈನ್ಯವನ್ನು ಕಂಡಾಗಲೇ ಪುರು ರಾಜನು ತಲೆಮರೆಸಿಕೊಳ್ಳುವನೋ ಏನೋ.

ಮಂಜು: ಅಪ್ಪಾ! ಯುದ್ಧ ಮಾಡುವುದು ನಾವೋ ಅವರೋ?

ಅಂಭಿ: ಲೆ! ಮಂಕು ಮಗನೆ! ಹಾಳಾಗಿ ಮಾತಾಡದಿರು. ಬಿಸಿಯೇರಿ ನೆತ್ತಿಗೆಟ್ಟುಹೋಗಿದೆ. ಯುವರಾಜನಂತೆ, ಬೆಪ್ಪು!

ಮಂಜು: ಅಪ್ಪಾ! ತಲೆಕೆಟ್ಟಿದ್ದು ನನಗಲ್ಲ, ನಿನಗೆ. ಯುದ್ಧವೆಂದರೆ ಜೀವಬಿಟ್ಟು ದಿಕ್ಕುಪಾಲಾಗುವ ನಪುಂಸಕ!

ಅಂಭಿ: ಏ! ಮಂಜೂ, ಸ್ವಲ್ಪ ಅಂಜು. ರಾಯರ ಕುದುರೆ ಕತ್ತೆ ಯಾಗಬೇಡ. ಅದೋ ನಮ್ಮ ಬಾದಶಹ ಬಂದೇಬಿಟ್ಟರು. (ಎಲ್ಲರೂ "ಬಾದಶಹರಿಗೆ ಜಯವಾಗಲಿ" ಎನ್ನಲು, ಅಲೆಕ್ಸಾಂಡರನು ಪ್ರವೇಶಿಸುತ್ತಾ "ಯುನಾನಕ್ಕೆ ಜಯವಾಗಲಿ'' ಎನ್ನುವನು).

ಅಲೆ: ಅಂಭಿರಾಜರೆ! ನಾನು ಪುರುರಾಜನನ್ನು ನೋಡಿದೆ. ಎಂತಹ ಸಾಹಸಿ! ತುಂಬಿದ ಕೀರ್ತಿ! ಅವನಂತಹ ಗುಣಮೂರ್ತಿಯನ್ನು ನಾನೆಲ್ಲೂ ಕಂಡಿಲ್ಲ.

ಅಂಭಿ: ಬಾದಶಹರೆ! ಅದೆಲ್ಲಾ ಕಪಟ. ಅದೆಲ್ಲಾ ಈ ತಕ್ಷಶಿಲೆ ಯನ್ನಾಳುವ ಅಂಭಿರಾಜನ ಮುಂದೆ ಸಾಗದು.

ಅಲೆ: ರಾಜರೆ! ಬಾಯಲ್ಲಿಂದಷ್ಟು ಸುಲಭವಲ್ಲ. ಸಭೆಗೆ ಹೋಗಿ ನೋಡಬೇಕು. ಎಂತಹವರನ್ನೂ ಮಾಟವಾಗಿಸುವ ಮಾರ್ದನಿ, ಮಾಧು ರ್ಯ, ಗಾಂಭೀರ್ಯ, ಚಾತುರ್ಯ. ನನ್ನ ಕಪಟವನ್ನೂ ಗುರುತಿಸಿದನು. ಮುಂದೇನು ಯೋಚನೆ? ಸೈನ್ಯಗಳು ಸಿದ್ಧವಾಗಿವೆಯಷ್ಟೆ?

ಅಂಭಿ: ಹೌದು ಬಾದಶಹರೆ! ಮೇರೆ ಮೀರಿದ ಸೈನ್ಯದವರು ತಮ್ಮ ಅಣತಿಯನ್ನು ಹಾರೈಸುತ್ತಿರುವರು.

ಅಲೆ: (ಗಂಭೀರವಾಗಿ) ಹಾಗಾದರೆ ವಿಳಂಬವೇಕೆ? ಸೆಲ್ಯೂಕಸ್, ಎಂಟಿಗೋನಸ್, ಧಾವಿಸಿರಿ ಹಿಂದುಸ್ಥಾನಕ್ಕೆ! ಅಲ್ಲಿ ಹಾರಲಿ ನಮ್ಮ ಧ್ವಜವು! ಸೈನ್ಯವು ಹಿಂದೂದೇಶವನ್ನು ಮುತ್ತಿಕೊಳ್ಳಲಿ! ಹಿಂದು ಮುಂದೆನದೆ ಹಿಂದೂ ದೇಶವನ್ನು ವಶಪಡಿಸುವ. ಹಿಂದೂಸ್ಥಾನವೇ ನಮ್ಮ ಗುರಿ! (ಎಲ್ಲರೂ "ಹಿಂದೂದೇಶವೇ ನಮ್ಮ ಗುರಿ" ಎನ್ನುತ್ತ ಧಾವಿಸುವರು). (ತೆರೆ).

## ದೃಶ್ಯ ೪

(ಯುದ್ಧಭೂಮಿ. ಪುರುರಾಜನು ಸೈನ್ಯದೊಂದಿಗೆ ಪ್ರವೇಶಿಸುತ್ತಾ)

(ಗಂಭೀರವಾಗಿ) ವೀರ ಭಾರತೀಯರೇ, ಎಚ್ಚರಿಕೆ. ನಿಮ್ಮ ಸುಖವೇ ನಮ್ಮ ಸುಖ. ದೈವಬಲವು ನಮಗಿದೆ. ಹಿಂದಡಿ ಹಾಕದಿರಿ. ಬೆದರದಿರಿ. ಬಾದಶಹನ ದಬ್ಬಾಳಿಕೆಗೆ, ವಂಚನೆಗೆ, ಚದರದಿರಿ, ಮೋಸಹೋಗದಿರಿ. ಗೆದ್ದರೆ ರಾಜ್ಯ. ಸತ್ತರೆ ವೀರಸ್ವರ್ಗ. ಷಂಡರಾಗದಿರಿ. ಭಂಡರಾಗದಿರಿ. ಶತ್ರುಗಳನ್ನು ಕಂಡಂತೆ ತುಂಡರಿಸಿರಿ. (ಎಲ್ಲರೂ) "ಹಿಂದೂಮಾತೆಗೆ ಜಯವಾಗಲಿ" ಎನ್ನಲು ಇತ್ತಂಡದವರಿಗೂ ಯುದ್ಧನಡೆಯುವುದು. ಪುರುರಾಜನೂ ಅಲೆಕ್ಸಾಂಡರನೂ ಖಾಡಾಖಾಡಿಯಾಗಿ ಹೊಡೆದಾಡಲು, ಬಾದಶಹನು ಬೀಳುವನು. ಪುರುವು ಎತ್ತಿದ ಕತ್ತಿಯನ್ನು ಕೆಳಗಿರಿಸಿ "ಈತನು ಇರಿದರೆ ಸಾಯುವನು ನಿಶ್ಚಯ. ಆದರೆ, ತಂಗಿಗೆ ಕೊಟ್ಟ ಭಾಷೆ ಭಂಗವಾಗದೇ? ಛೆ!" ಎನ್ನಲು, ಅಂಭಿರಾಜನು ಹಿಂದಿನಿಂದ ಬಂದು ರಾಜನನ್ನು ಬಂಧಿಸುವನು. ರಾಜನು ಹಿಂತಿರುಗಿ: ಯಾರದು? ಅಂಭಿರಾಜ! ಛೀ! ಯುದ್ಧದಲ್ಲಿ ಭಯಪಟ್ಟು ಹೇಡಿಯಂತೆ ಈ ಕೃತ್ಯವನ್ನು ಮಾಡುತ್ತಿರುವೆಯಾ?

ಅಂಭಿ: ನ್ಯಾಯಾನ್ಯಾಯಕ್ಕೆ ಇದೀಗ ಸಮರಭೂಮಿ. ಸಮಯೋಚಿತ ಕಾರ್ಯ ನಮ್ಮದು. ಎಳೆದೊಯ್ಯಿರಿ ಈತನನ್ನು. ಬಾದಶಹಂಗೆ ಶೈತ್ಯೋಪಚಾರಗಳು ನಡೆಯಲಿ. (ತೆರೆ).

## ದೃಶ್ಯ ೫

(ಸಭೆ. ಅಲೆಕ್ಸಾಂಡರನು ಕುಳಿತಿರುವನು. ಬಂಧಿಸಿದ ರಾಜನನ್ನು ತಂದಿರುವರು. ಸಭೆಯಲ್ಲಿ ಪುರುವಿನ ಮಗ ಸಮರನು ಮುಸುಕುವಸ್ತ್ರದಿಂದ ಮುಚ್ಚಿಕೊಂಡು ಕಿರುಗತ್ತಿಯನ್ನು ಕೈಯಲ್ಲಿ ಹಿಡಿದು ನಿಂತಿದ್ದಾನೆ).

ಅಲೆ: ಎಲೈ ರಾಜನೆ! ನೀನೀಗ ನಮ್ಮ ಸೆರೆಯಾಳು. ನಿನಗೆ ಜೀವದಾನವನ್ನು ಮಾಡಿರುವೆ. ಇನ್ನೇನನ್ನು ಆಶಿಸುವೆ?

ಪುರು: ಎಲೈ ಅಲೆಕ್ಸಾಂಡರ! ಯಾರಿಗೂ ಎಂದಿಗೂ ಮಣಿಯದ ಶಿರವಿಂದು ಅನ್ಯಾಯದಿಂದ ಸೆರೆಹಿಡಿದು ಬಂಧಿಸಿದ ಮಾತ್ರಕ್ಕೆ ಮಣಿಯುವುದೆಂದು ಭಾವಿಸದಿರು.

ಅಲೆ: ಅಂಭಿರಾಜರೆ! ಈತನನ್ನು ಏಕೆ ಬಂಧಿಸಿದಿರಿ? ನಾನು ಹೇಳಿದೆನೆ?

ಅಂಭಿ: ಬಾದಶಹರೆ! ರಿಪುವು ಸೆರೆಸಿಕ್ಕಿದಾಗ ದಂಡಿಸುವುದೇ ವಿನಹ ಬಿಡುವುದು ಸಮ್ಮತವಲ್ಲ.

ಪುರು: ಅಂಭಿರಾಜನೇ ನಿನ್ನ ಎದೆಗಾರಿಕೆಗೆ ಧಿಕ್ಕಾರ! ಸಭೆಯು ನ್ಯಾಯವನ್ನು ತಿಳಿಯದ ನೀನೊಬ್ಬ ರಾಜನೆ? ನಿನ್ನಂತಹ ಹೇಡಿಗಳಿಂದಲೇ ಭಾರತವು ಹೀನವುಟ್ಟಕ್ಕಿಳಿದಿದೆ ಹಿಂದೂಮಾತೆಯ ಮಡಿಲಲ್ಲಿ ಬೆಳೆದ ನೀನು ಭಾರತಕ್ಕೆ ಮುತುವ ಸೈನ್ಯವನ್ನು ಎದುರಿಸದೆ ಪರರಾಷ್ಟ್ರೀಯ ನೊಬ್ಬನ ಸಹಾಯದಿಂದ ಹಿಂದೂಮಾತೆಗೆ ದ್ರೋಹವನ್ನು ಬಗೆದ ನಿನಗೆ ಲಜ್ಜೆಯಾದರೂ ಆಗದೆ? ನನ್ನನ್ನು ಯಾವ ಆಸೆಯಿಂದ ಬಂಧಿಸಿದೆಯೋ ಅಂತೆಯೇ ಮಾಡು. ನಿನ್ನ ಬಾದಶಹರಿಗೆ ಸ್ವಧರ್ಮದ್ರೋಹಕೃತ್ಯವು ಸಮ್ಮತ ವಾದರೆ ಮನಬಂದಂತೆ ಮಾಡಬಹುದು.

ಅಲೆ: ಅಂಭಿರಾಜರೆ! ದುಡುಕಿ ಮಾತಾಡದಿರಿ. ಬಂಧನವನ್ನು ಬಿಡಿಸಿರಿ. (ಬಂಧನ ಬಿಡಿಸಲು, ಬಾದಶಹನು ಸಮರನ ಮುಸುಕು ತೆಗೆದು) ರಾಜಪುತ್ರ, ಯಾರು ನೀನು? ಪುರುರಾಜರ ಪುತ್ರನಷ್ಟೆ? ನಿಜ. ಬಂಧಿಸಿದ ತಂದೆಯ ಆಪತ್ಕಾಲದಲ್ಲಿ ರಕ್ಷಣೆಗೋಸುಗ ಕಿರುಗತ್ತಿ ಸಹಿತ ಬಂದೆಯಾ? ಭೇಷ್!

ಪುರು: ಕುಮಾರ! ಏಕೆ ಬಂದೆ? ನಿನಗೀ ಮೋಸವಿದ್ಯೆಯನ್ನು ಯಾರು ಕಲಿಸಿದರು? ನನ್ನ ಕೀರ್ತಿಗೆ ಹಾನಿ ತರುವೆಯಾ? ತಪ್ಪಿ ನಡೆದು ದಕ್ಕಾಗಿ ಬಾದಶಹನೊಡನೆ ಕ್ಷಮಾಯಾಚಿಸು. ಹ್ಞೂ. (ತಲೆ ಬಾಗಿಸಿ ಕ್ಷಮಾ ಯಾಚಿಸಲು)

ಅಲೆ: ಅಂಭಿರಾಜರೆ! ನೋಡಿದಿರಾ ಪುರುರಾಜರ ಗುಣವನ್ನು! ಗುಣಕ್ಕೆ ಮತ್ಸರವಿಲ್ಲ. ನಿಮ್ಮ ದುರ್ಭಾವನೆಯನ್ನು ತಳೆದು ರಾಜರೊಡನೆ ಸಂಧಿಯಾಗಿರಿ. (ಅಂಭಿರಾಜನು ಪುರುರಾಜನನ್ನು ಆಲಿಂಗಿಸುವನು).

ಅಂಭಿ: ಪುರುರಾಜ! ಕ್ಷಮಿಸು. ನಾನಿನ್ನು ಎಂದೆಂದೂ ದೇಶ ದ್ರೋಹಿಯಾಗಲಾರೆನು. ನಿನ್ನ ಸಹಾಯವು ಸದಾ ನನಗಿರಲಿ.

ಅಲೆ: ಮಹಾರಾಜ! ಅಂಭಿರಾಜರು ದುರ್ಬಲರು. ನಿನ್ನ ಸಖ್ಯ ದಿಂದ ಧೈರ್ಯವಂತರಾದರು. ನಿನ್ನ ಈ ರಾಜ್ಯ ನಿನ್ನದೇ ಆಗಿದೆ. ನಿನ್ನ

ಗುಣವಂತೂ ಆದರ್ಶಪ್ರಾಯವಾಗಿದೆ. ನಾವೀರ್ವರೂ ಗೆಳೆಯರಾಗೋಣ. ನಾವಿನ್ನು ನಮ್ಮ ರಾಷ್ಟ್ರಕ್ಕೆ ಹಿಂತೆರಳುವೆವು. (ಆಲಿಂಗಿಸುವನು).

(ತೆರೆ).

## ದೃಶ್ಯ ೬

(ಬಯಲು.) ಪುರುರಾಜನೂ ಮಂತ್ರಿಯೂ ಪ್ರವೇಶಿಸುತ್ತಾ—

ರಾಜ: ಮಂತ್ರಿವರ್ಯ! ಅಲೆಕ್ಸಾಂಡರನು ಅತ್ಯಂತ ಸಾಹಸಿ ನಿಜವಷ್ಟೆ?

ಮಂತ್ರಿ: ಮಹಾರಾಜ! ರಣಭೂಮಿಯಲ್ಲಿ ಬಿದ್ದ ಅಲೆಕ್ಸಾಂಡರನನ್ನು ನೀವೇಕೆ ಘಾತಿಸದೆ ಬಿಟ್ಟಿರಿ? ದಯದೋರಿದಿರೇಕೆ?

ರಾಜ: ಕೊಟ್ಟ ಭಾಷೆಯನ್ನು ಸಫಲಿಸುವುದಕ್ಕಾಗಿ ನಿರಾಯುಧನನ್ನು ಹೊಡೆಯುವುದು ಧರ್ಮವಲ್ಲ. (ಆಗ ರೋಕ್ಸಾ ಪ್ರವೇಶಿಸಿ ಎರಗಿ)

ರೋಕ್ಸಾ: ಸಹೋದರ, ಧನ್ಯಳಾದೆ. ನಿಮ್ಮಂತಹ ಗುಣವಂತ ಅಣ್ಣನನ್ನು ಪಡೆದ ನಾನೇ ಧನ್ಯಳು.

ಪುರು: ಇಲ್ಲ ತಂಗಿ. ನಿನ್ನ ವಾತ್ಸಲ್ಯದಿಂದ ನನಗೆ ಜಯವೇ ಸರಿ. ನೀನೇಕೆ ಬಂದೆ? ಬೇಗನೆ ಹೋಗು. ನಿಮ್ಮ ಅಳಿದುಳಿದ ಸೈನ್ಯದವರೊಂದಿಗೆ ಬಾದಶಹರು ಹಿಂತೆರಳಿರುವರು. ನಿನ್ನನ್ನು ಕಾಣಲು ತವಕಿಸಹತ್ತಿರಬಹುದು.

ರೋಕ್ಸಾ: ಉಪಕಾರ ಸ್ಮರಣೆಯು ಚಿರವಾಗಿದೆ ಋಣಿಯಾಗಿರುವೆನು. ಬರುತ್ತೇನೆ (ಹೋಗುವಳು). ಪುರು: ಮಂತ್ರಿಗಳೇ ಆ ಬಾದಶಹನು ಇವಳ ರೂಪಕ್ಕೆ ಮಾರುಹೋಗಿದ್ದಾನೆ. ಆ ಹಿಂದೂ ದೇಶದ್ರೋಹಿ ಅಂಭಿರಾಜನ ಮಾತಿಗೆ ಮರುಳಾಗಿ ದಂಡೆತ್ತಿಬಂದನು. ಹೇಗೂ ಸಂಕಟದಿಂದ ಪಾರಾದೆವು. ಯುದ್ಧದಲ್ಲಿ ಅಳಿದುಳಿದು ಗಾಯಹೊಂದಿದ ಭಾರತೀಯರಿಗೆ ತಕ್ಕ ಶೈತ್ಯೋಪಚಾರಗಳು ನಡೆಯಲಿ. ಜನತಾಸೇವೆಯೇ ಜನಾರ್ದನ ಸೇವೆ. ನಡೆಯಿರಿ (ಹೋಗುವರು). (ತೆರೆ).

(ಹೊದಿಕೆಯ ಎರಡನೇ ಪುಟಕ್ಕೆ ಮುಂದುವರಿದಿದೆ)

Edited, Printed & Published by K. V. Shenoy
at The Prabhat Printers, Ltd., Mangalore